## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2074 |
| ಸದಸ್ಯರ ಹೆಸರು | : | ಶ್ರೀ ಕೆ.ಪ್ರತಾಪ್‌ಚಂದ್ರ ಶೆಟ್ಟಿ, (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 24-03-2021. |
| ಉತ್ತರಿಸುವ ಸಚಿವರು | : | ಮಾನ್ಯ ಉಪಮುಖ್ಯಮಂತ್ರಿಗಳು,<br>ಲೋಕೋಪಯೋಗಿ ಇಲಾಖೆ |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸೂರತ್ಕಲ್ ನಿಂದ ಕುಂದಾಪುರ ರಾಷ್ಟ್ರೀಯ ಹೆದ್ದಾರಿ ಚತುಷ್ಪಥ ಕಾಮಗಾರಿಯನ್ನು ಪ್ರಾರಂಭಿಸಲಾಗಿದ್ದು ಯಾವಾಗ; ಅಂದಾಜು ಮೊತ್ತವೆಷ್ಟು; ಈ ಯೋಜನೆಯಲ್ಲಿ ಪೂರ್ಣಗೊಳಿಸಿದ ಕಾಮಗಾರಿಗಳು ಯಾವುವು; ಬಾಕಿಯಿರುವ ಕಾಮಗಾರಿಗಳು ಯಾವುವು; | ಸೂರತ್ಕಲ್ ನಿಂದ ಕುಂದಾಪುರ ರಾಷ್ಟ್ರೀಯ ಹೆದ್ದಾರಿ ಚತುಷ್ಪಥ ಕಾಮಗಾರಿಯನ್ನು ದಿನಾಂಕ:05.09.2020 ರಂದು ಪ್ರಾರಂಭಿಸಿದ್ದು, ಸದರಿ ಕಾಮಗಾರಿಯ ಅಂದಾಜು ಮೊತ್ತ ಹಾಗೂ ಭೌತಿಕ ಪ್ರಗತಿ ಈ ಕೆಳಕಂಡಂತಿದೆ ಎಂದು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ ರವರು ತಿಳಿಸಿರುತ್ತಾರೆ.<br>ಅ) ಅನುಮೋದಿತ ಅಂದಾಜು ಮೊತ್ತ – ರೂ. 804.00 ಕೋಟಿ<br>ಆ) ಭೌತಿಕ ಪ್ರಗತಿ – ಶೇ. 98.35<br>ಇ) ಉಳಿಕೆ ಕಾಮಗಾರಿ – ಸದರಿ ಹೆದ್ದಾರಿಯಲ್ಲಿ 0.33 ಕಿ.ಮೀ.ರಷ್ಟು ಉದ್ದದಷ್ಟು ಅಗಲೀಕರಣ ಕಾಮಗಾರಿಯನ್ನು ಕೈಗೊಳ್ಳಬೇಕಾಗಿರುತ್ತದೆ. |
| ಆ) | ಈ ಹೆದ್ದಾರಿಯಲ್ಲಿರುವ ಟೋಲ್ ಕೇಂದ್ರಗಳ ಸಂಖ್ಯೆ ಎಷ್ಟು; ಈ ಟೋಲ್ ಕೇಂದ್ರಗಳಲ್ಲಿರುವ ಮೂಲ ಸೌಕರ್ಯಗಳು ಯಾವುವು; ಅವುಗಳಲ್ಲಿ ಸಿಬ್ಬಂದಿಗಳ ನಿಯಂತ್ರಣಕ್ಕಾಗಿ ಸರ್ಕಾರದ ಕ್ರಮವೇನು; | ಈ ಹೆದ್ದಾರಿಯಲ್ಲಿ ಒಟ್ಟು 3 ಟೋಲ್ ಪ್ಲಾಜಾಗಳಿರುತ್ತವೆ.<br>ಅ) ಸಾಸ್ತಾನ್ ಟೋಲ್ ಪ್ಲಾಜಾ<br>ಆ) ಹೆಜ್ಮಾಡಿ ಟೋಲ್ ಪ್ಲಾಜಾ<br>ಇ) ತಲಪಾಡಿ ಟೋಲ್ ಪ್ಲಾಜಾ<br><br>ಮೇಲಿನ ಟೋಲ್ ಪ್ಲಾಜಾಗಳಲ್ಲಿ ಈ ಕೆಳಕಂಡ ಮೂಲ ಸೌಕರ್ಯಗಳನ್ನು ಕಲ್ಪಿಸಲಾಗಿದೆ.<br>ಅ) ಶೌಚಾಲಯಗಳು<br>ಆ) ಆಂಬುಲೆನ್ಸ್<br>ಇ) ಹೆದ್ದಾರಿ ಪ್ಯಾಟ್ರೋಲಿಂಗ್ ವಾಹನಗಳು<br>ಈ) ಹೆದ್ದಾರಿ ಮಿನಿ ನೆಸ್ಟ್<br>ಉ) ಪ್ರಥಮ ಚಿಕಿತ್ಸೆ<br>ಊ) ವೈದ್ಯಕೀಯ ನೆರವು ಕೇಂದ್ರ<br>ಋ) ಹೆದ್ದಾರಿ ಸಹಾಯವಾಣಿ ಸಂಖ್ಯೆಗಳು<br>ಎ) ಟ್ರಕ್ ಲೇ ಬೈ<br><br>ಮುಂದುವರೆದು, ಟೋಲ್ ಪ್ಲಾಜಾಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ಟೋಲ್ ಮಾರ್ಗಸೂಚಿ ಯನ್ವಯ ರಸ್ತೆ ಬಳಕೆದಾರರೊಂದಿಗೆ ಸಭ್ಯವಾಗಿ ವರ್ತಿಸಲು ನಿಯಮಿತ ತರಬೇತಿಯನ್ನು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ ರವರು ನೀಡುತ್ತಿರುತ್ತಾರೆಂದು ತಿಳಿಸಿರುತ್ತಾರೆ. |

| | | |
|---|---|---|
| ಇ) | ಉಡುಪಿ ಜಿಲ್ಲೆಯ ಬ್ರಹ್ಮಾವರ (ಆಕಾಶವಾಣಿ ಜಂಕ್ಷನ್ ಬಳಿ) ಬ್ರಹ್ಮಾವರ–ಜನ್ನಾಡಿ ರಸ್ತೆಯ ಕೂಡುಭಾಗದಲ್ಲಿ ಅವೈಜ್ಞಾನಿಕ ಕಾಮಗಾರಿ ನಡೆದಿರುವುದರಿಂದ ಅಪಘಾತಗಳು ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು? | ಬ್ರಹ್ಮಾವರ (ಆಕಾಶವಾಣಿ ಜಂಕ್ಷನ್ ಬಳಿ) ಬ್ರಹ್ಮಾವರ – ಜನ್ನಾಡಿ ರಸ್ತೆಯು "ಟಿ" ಕೂಡುಭಾಗವಾಗಿದ್ದು, ರಿಯಾಯಿತಿ ಒಪ್ಪಂದದ ನಿಬಂಧನೆಗಳಂತೆ ರಿಯಾಯಿತಿದಾರರು ಚತುಷ್ಪಥ ಹೆದ್ದಾರಿಯನ್ನು ಗ್ರೇಡ್ ಜಂಕ್ಷನ್‌ನೊಂದಿಗೆ ಪೂರ್ಣಗೊಳಿಸಿರುತ್ತಾರೆ ಹಾಗೂ ಅಗತ್ಯ ಸೈನ್ ಬೋರ್ಡ್‌ಗಳನ್ನು ಸಹ ಸ್ಥಾಪಿಸಿರುತ್ತಾರೆ. ಆದಾಗ್ಯೂ, ಪಾದಚಾರಿ ಮೇಲ್ಸೇತುವೆಯನ್ನು ನಿರ್ಮಿಸಲು ರಸ್ತೆ ಸುರಕ್ಷತಾ ಸಮಿತಿಯು ಪ್ರಸ್ತಾಪಿಸಿದ್ದು, ಅದರಂತೆ ಅಂದಾಜು ಪಟ್ಟಿಯನ್ನು ತಯಾರಿಸಿ ಅನುಮೋದನೆ ಪಡೆದಿದ್ದು, ಮೆ: ಇ–5 Infrstructure Pvt. Ltd. ರವರಿಗೆ ದಿನಾಂಕ: 15.02.2021 ರಂದು Letter of acceptance (LOA) ನೀಡಲಾಗಿದೆ ಹಾಗೂ ಶೀಘ್ರದಲ್ಲಿ ಕಾಮಗಾರಿಯನ್ನು ಕೈಗೊಳ್ಳಲಾಗುವುದು ಎಂದು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ ರವರು ತಿಳಿಸಿರುತ್ತಾರೆ. |

ಕಡತ ಸಂಖ್ಯೆ: ಲೋಇ 113 ಸಿಎನ್‌ಹೆಚ್ 2021 (ಇ)

(ಗೋವಿಂದ.ಎಂ.ಕಾರಜೋಳ)
ಉಪ ಮುಖ್ಯಮಂತ್ರಿಗಳು
ಲೋಕೋಪಯೋಗಿ ಇಲಾಖೆ